# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 484 (497)
ಸದಸ್ಯರ ಹೆಸರು : ಶ್ರೀ ಎಸ್. ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 10.03.2020
ಉತ್ತರಿಸಬೇಕಾದ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಸಾರ್ವಜನಿಕ ಗ್ರಂಥಾಲಯ ಕಾಯ್ದೆಯಡಿ ಸಾರ್ವಜನಿಕರು ಮಹಾನಗರ ಪಾಲಿಕೆಗಳಿಗೆ ಪಾವತಿಸುವ ಆಸ್ತಿ ತೆರಿಗೆಯಲ್ಲಿ ಶೇ.6ರ ಮೊತ್ತವನ್ನು ಗ್ರಂಥಾಲಯ ಪ್ರಾಧಿಕಾರಿಗಳಿಗೆ ಪಾವತಿಸಬೇಕಾಗಿದೆಯೇ: | ಹೌದು. |
| ಆ) | ಹಾಗಿದ್ದಲ್ಲಿ, ಮೈಸೂರು ಮಹಾನಗರ ಪಾಲಿಕೆಯವರು ವಸೂಲಿ ಮಾಡಿದ ಗ್ರಂಥಾಲಯ ಕರವೆಷ್ಟು: ಇದನ್ನು ಯಾವುದಕ್ಕೆ ಬಳಕೆ ಮಾಡಿಕೊಳ್ಳಲಾಗಿದೆ; (ವಿವರ ನೀಡುವುದು) | 1997-98 ರಿಂದ 2018-19ನೇ ಸಾಲಿನವರೆಗೆ ಒಟ್ಟು ರೂ.3623.55 ಲಕ್ಷಗಳ ಗ್ರಂಥಾಲಯ ಕರವನ್ನು ವಸೂಲಿ ಮಾಡಲಾಗಿದೆ.<br><br>2019-20 ನೇ ಸಾಲಿನಲ್ಲಿ ರೂ.424.39ಲಕ್ಷಗಳ ಗ್ರಂಥಾಲಯ ಕರ ವಸೂಲಿಯಾಗಿದ್ದು, ರೂ.405.00 ಲಕ್ಷಗಳನ್ನು ಗ್ರಂಥಾಲಯ ಪ್ರಾಧಿಕಾರಕ್ಕೆ ಪಾವತಿಸಲಾಗಿದೆ. ಬಾಕಿ ಮೊತ್ತವನ್ನು ಪಾವತಿಸಲು ಸುತ್ತೋಲೆ ಹೊರಡಿಸಲಾಗಿದೆ.<br><br>• ರೂ.1896.58 ಲಕ್ಷಗಳನ್ನು ಗ್ರಂಥಾಲಯ ಪ್ರಾಧಿಕಾರಕ್ಕೆ ಪಾವತಿ ಮಾಡಲಾಗಿದೆ.<br>• ಮೈಸೂರು ನಗರವು ಪಾರಂಪರಿಕ ಕ್ಷೇತ್ರವಲ್ಲದೆ ಪ್ರೇಕ್ಷಣಿಯ ಸ್ಥಳವಾಗಿದ್ದು ಹಾಗೂ ಅತೀ ವೇಗವಾಗಿ ಬೆಳೆಯುತ್ತಿರುವ ನಗರವಾಗಿರುವ ದೃಷ್ಟಿಯಿಂದ ನಗರದ ಸಾರ್ವಜನಿಕರಿಗೆ ಮೂಲ ಸೌಕರ್ಯಗಳನ್ನು ಒದಗಿಸುವುದು ಮತ್ತು ನಗರದ ಸ್ವಚ್ಛತೆಯನ್ನು ಕಾಪಾಡುವುದು ಪಾಲಿಕೆಯ ಆದ್ಯ ಕರ್ತವ್ಯವಾಗಿದ್ದು ಸ್ವಚ್ಛತೆ ಕಾರ್ಯನಿರ್ವಹಿಸುವ ಪೌರಕಾರ್ಮಿಕರ ವೇತನ ಪಾವತಿಸಲು, ಬೀದಿ ದೀಪಗಳ ನಿರ್ವಹಣೆ, ಘನತ್ಯಾಜ್ಯ ವಸ್ತುಗಳ ನಿರ್ವಹಣೆ, |

| | | |
|---|---|---|
| | | ಅಭಯ ಕ್ಷಿಪ್ರ ಕಾರ್ಯಪಡೆ, ಕಛೇರಿ ಆಡಳಿತ ನಿಯಂತ್ರಣ, ಪಾರಂಪರಿಕ ಕಟ್ಟಡಗಳ ನಿರ್ವಹಣೆ, ಕುಡಿಯುವ ನೀರು ಸರಬರಾಜು, ಪ್ರಾಣಿ ಜನನ ನಿಯಂತ್ರಣ ಕಾರ್ಯಕ್ರಮ ಮತ್ತು ಬೀದಿ ನಾಯಿಗಳ ಸಂರಕ್ಷಣೆ ಹಾಗೂ ಬಿಡಾಡಿ ದನಗಳ ನಿಯಂತ್ರಣಕ್ಕಾಗಿ ಗ್ರಂಥಾಲಯ ಕರವನ್ನು ಉಪಯೋಗಿಸಿಕೊಳ್ಳಲಾಗಿದೆ. |
| ಇ) | ಗ್ರಂಥಾಲಯದ ಕರವನ್ನು ಪ್ರತ್ಯೇಕವಾಗಿ ಮೀಸಲಿರಿಸದೆ ಅನ್ಯ ವೆಚ್ಚಗಳಿಗೆ ಉಪಯೋಗಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಹೌದು, ಸರ್ಕಾರದ ಗಮನಕ್ಕೆ ಬಂದಿದೆ.<br><br>ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಗ್ರಂಥಾಲಯ ಕರವನ್ನು ವಸೂಲು ಮಾಡಿದ್ದರೂ ಸಹ ಇದನ್ನು ಗ್ರಂಥಾಲಯ ಇಲಾಖೆಗೆ ಪಾವತಿಸದೇ ಅನ್ಯ ಉದ್ದೇಶಗಳಿಗೆ ಬಳಸಿಕೊಂಡಿರುವ ಮೊತ್ತವನ್ನು ಎಸ್‌ಎಫ್‌ಸಿ ಮುಕ್ತನಿಧಿಯಿಂದ ಬಾಕಿ ಇರುವ ಮೊತ್ತವನ್ನು ತೀರುವಳಿ ಮಾಡಲು ಸರ್ಕಾರದ ಪತ್ರ ಸಂಖ್ಯೆ: ನಅಇ 214 ಎಂಎನ್‌ಇ 2015 ದಿ:19.02.2020 ರಲ್ಲಿ ನಿರ್ದೇಶಿಸಲಾಗಿದೆ. ಅದರಂತೆ, ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ದಿನಾಂಕ: 31.12.2019 ರವರೆಗೆ ಬಾಕಿ ಉಳಿಸಿಕೊಂಡಿರುವ ಗ್ರಂಥಾಲಯ ಕರದ ಮೊತ್ತವನ್ನು ಎಸ್‌ಎಫ್‌ಸಿ ಮುಕ್ತನಿಧಿಯಿಂದ ಒಂದು ಬಾರಿಗೆ ಮಾತ್ರ ಪಾವತಿಸಲು ತುರ್ತಾಗಿ ಕ್ರಮಕೈಗೊಳ್ಳಲು ಪೌರಾಡಳಿತ ನಿರ್ದೇಶನಾಲಯದ ವತಿಯಿಂದ ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ಸುತ್ತೋಲೆ ಹೊರಡಿಸಿದೆ. |

ನಅಇ 33 ಎಸಿಎಂ 2020 (ಇ)

(ಬಿ.ಎ. ಬಸವರಾಜ)
ಮಾನ್ಯ ನಗರಾಭಿವೃದ್ಧಿ ಸಚಿವರು